# ಇಗ್ಲೂಕ್ ಮತ್ತು ಸೀಲ್



ಚಿತ್ರ ಮತ್ತು ಕಥೆ ಬರ್ನಾಡ್ ವೈಸ್ ಮ್ಯಾನ್



ಇಗ್ಲೂಕ್ ನಿದ್ದೆ ಮಾಡ್ತಾಯಿದ್ದ

ಅವ್ನ ಅಪ್ಪ ಅವ್ನನ್ನ ಅಲ್ಲಾಡಿಸಿ ಎಬ್ಬಿಸಿ ಹೇಳಿದ

ಏಳೋ ಮಗನೇ

ಇವತ್ತು ನನ್ನ ಜೊತೆ  ಬೇಟೆಗೆ  ಬರ್ತಾಯಿದಿಯ.

"ಅವನ ಅಮ್ಮ ಹೇಳಿದ್ಲು
"ಅವನಿನ್ನೂ ಚಿಕ್ಕೋನು."



ಅಪ್ಪ ನಗುತ್ತಾ ಹೇಳಿದ

"ನನ್ನ ಮೊದಲ ಬೇಟೆಯ ಕಾಲದಲ್ಲಿ ಇವನಿಗಿಂತ

ಚಿಕ್ಕವನಿದ್ದೆ

ಇಗ್ಲೂಕನ ಅಮ್ಮ ಒಂದಿಷ್ಟು ತಿಮಿಂಗಿಲದ



ಮಾಂಸವನ್ನು ತಿನ್ನಲು ಕೊಟ್ಟಳು

ಈಗ ಬೇಟೆಯ ಸಮಯ

ಇಗ್ಲೂಕ ಮತ್ತು ಅಪ್ಪ ಸೀಲ್ ಚರ್ಮದ ಬೂಟು, ಉಣ್ಣೆಯ
ಕೋಟು ಕೈ ಗವಸು ತೊಟ್ಟರು



ಅಪ್ಪ ನಕ್ಕು ಹೇಳಿದ

"ನಿನಗಾಗಿ ಏನೋ ಮಾಡಿದ್ದೇನೆ "

ಒಂದು ಚೂಪಾದ ಮುಳ್ಳುಗಳಿರುವ ಈಟಿಯನ್ನು ಕೈಗಿತ್ತ



"ಹೊರಡೋಣ" ಅಪ್ಪ ಹೇಳಿದ

ಅವರು ಮನೆಯಿಂದ ಹೊರಗೆ ತೆವಳಿದರು



ಅವರ ನಾಯಿಗಳನ್ನು ಸ್ಲೆಡ್ ಗೆ ಕಟ್ಟಿದರು ಅಪ್ಪ ನಾಯಿಗಳನ್ನು ಓಡಿಸಿದ.

ನಾಯಿಗಳು ಸ್ಲೆಡ್ ಅನ್ನು ವೇಗವಾಗಿ ಎಳೆದವು.

ಸ್ವಲ್ಪ ಹೊತ್ತಿಗೆ ಅವರು ಹಿಮ ಹಾಸಿನ ಮೇಲೆ ಬಂದರು





ಅಲ್ಲಿ ಸ್ಲೆಡ್ ನಿಂದ ಇಳಿದರು

ಅಪ್ಪ ಹೇಳಿದ "ಹಿಮದ ಮೇಲೆ

ನಡೆಯುವುದು ಬೇಡ, ತೆವಳೋಣ,

ಸೀಲುಗಳು ನಮ್ಮನ್ನ ನೋಡಿದರೆ

ಇನ್ನೊಂದು ಸೀಲೆಂದು ತಿಳಿಯುತ್ತವೆ.

ಆಗ ಅವು ಹೆದರಿ ಓಡಿ ಹೋಗುವುದಿಲ್ಲ.

ನೋಡು, ಅಲ್ಲೊಂದು ಸೀಲ್ ನಂತೆ ಕಾಣುತ್ತಿದೆ.

ಅಪ್ಪ ಮೆತ್ತಗೆ ಕಿವಿಯಲ್ಲಿ ಹೇಳಿದ.





ಇಗ್ಲೂಕ್ ನಿಂತು ನೋಡಿದ.

ಆಗ ಸೀಲ್ ಸಹ ಅವನನ್ನು ನೋಡಿತು.

ತಕ್ಷಣ ಅದು ಹಿಮದ ಮಧ್ಯದಲ್ಲಿರುವ ನೀರಿನ ಗುಂಡಿಗೆ ಹಾರಿತು.



ಇಗ್ಲೂಕ್ ಹೇಳಿದ "ತಪ್ಪಾಯಿತು ಅಪ್ಪ".

ಅಪ್ಪ ಹೇಳಿದ ಪರವಾಗಿಲ್ಲ, ಇನ್ನೊಂದು ಹುಡುಕೋಣ

ಆದರೆ ಈಗ ಒಂದರ ಬದಲಾಗಿ ಎರಡು ಸೀಲ್ ಕಂಡವು.

ಒಂದು ದೊಡ್ಡದು ಮತ್ತೊಂದು ಚಿಕ್ಕದು

ಇಗ್ಲೂಕ್ ನ ಅಪ್ಪ ಪಿಸುಗುಟ್ಟಿದ

ಇಷ್ಟು ದೂರದಿಂದ ನಿನ್ನ ಈಟಿಯನ್ನು ಎಸೆಯಲಾರೆ.







ಇನ್ನಷ್ಟು ಹತ್ತಿರ ಹೋಗೋಣ.

ಅವರು ಮತ್ತಷ್ಟು ಹತ್ತಿರ ಬಂದರು.

ದೊಡ್ಡ ಸೀಲಿಗೆ ಅವರು ಮನುಷ್ಯರೆಂದು ತಿಳಿಯಿತು.

ತಕ್ಷಣ ಮರಿಯನ್ನು ಕರೆಯಿತು

ಎರಡೂ ಹಿಮದ ನಡುವಿನ ಗುಂಡಿಗೆ

ಕುಪ್ಪಳಿಸುತ್ತಾ ಹೊರಟವು.

ಅಪ್ಪ ಹೇಳಿದ ಬೇಗ ಬೇಗ

ನಿನ್ನ ಈಟಿಯನ್ನು ದೊಡ್ಡದಕ್ಕೆ ಎಸೆ.

ಇಗ್ಲೂಕ್ ನಿಂತು ಈಟಿಯನ್ನು ಎಸೆದ.

ದೊಡ್ಡ ಸೀಲ್ ಗುಂಡಿಯೊಳಗೆ ಹಾರಿತು.

ಈಟಿ ಹಿಮದ ಮೇಲೆ ಬಿತ್ತು.



ಮರಿ ಸೀಲ್ ಇನ್ನೂ ಗುಂಡಿಯತ್ತ ಕುಪ್ಪಳಿಸುತ್ತಾ ಇತ್ತು.



ಅಪ್ಪ ಓಡಿ ಬಂದ

ಬೇಗ ಈಟಿಯನ್ನು ತೆಗೆದುಕೋ

ಗುರಿ ಇಟ್ಟು ಮರಿಯತ್ತ ಹೊಡೆ,

ಅದು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ
ಎಂದ.



ಇಗ್ಲೂಕ್ ಈಟಿಯನ್ನು ಎತ್ತಿದ
ಆದರೆ ಎಸೆಯಲಿಲ್ಲ.

ಏಕೆ ಎಂದ ಅಪ್ಪ

ಇಗ್ಲೂಕ್ ಹೇಳಿದ. ಅದಿನ್ನು ಚಿಕ್ಕ ಮರಿ ಪಾಪು.

ಅಪ್ಪ ಹೇಳಿದ "ನಮಗೆ ತಿನ್ನಲು ಆಹಾರ ಬೇಕು".

ಅಪ್ಪ ಹೇಳಿದ "ನಮಗೆ ತಿನ್ನಲು ಆಹಾರ ಬೇಕು".

ತನ್ನ ಈಟಿಯನ್ನು ಎತ್ತಿ ಹೊಡೆಯಲು ಸಿದ್ದನಾದ.



ಇಗ್ಲೂಕ್ ಅಪ್ಪ ಮತ್ತು ಸೀಲ್ ಮಧ್ಯೆ ಅಡ್ಡ ನಿಂತ.

ಬೇಡ ಅಪ್ಪ ಬೇಡ ಮರಿಯನ್ನು ಹೊಡೆಯಬೇಡ.

ನಾವು ದೊಡ್ಡ ಸೀಲ್ ಮಾತ್ರ ತಿನ್ನೋಣ

ಇದು ಇನ್ನೂ ಮರಿ.

ಅಪ್ಪ ಹೇಳಿದ

ಇಲ್ಲಿ ಕೇಳು ಮರಿ

ತಾಯಿ ಸೀಲ್ ಗುಂಡಿಗೆ ಹಾರಿದೆ.

ಇದಿನ್ನೂ ಮರಿ, ತಾಯಿಯ ಹಾಲು ಇಲ್ಲದೆ ಬದುಕುವುದಿಲ್ಲ

ಅಲ್ಲದೆ ಅದು ಮೀನನ್ನು ಹಿಡಿಯಲು ಇನ್ನು ಚಿಕ್ಕದು

ಅದು ಹಸಿವಿನಿಂದ ಸಾಯುತ್ತದೆ.

ಅಥವಾ ಒಂದು ಹಿಮಕರಡಿ ಅದನ್ನು ತಿನ್ನುತ್ತದೆ.



"ಇಲ್ಲ, ಹಾಗೆ ಆಗೋಲ್ಲ"ಇಗ್ಲೂಕ್ ಕಿರುಚಿದ

ಅವನು ಆ ಮರಿ ಸೀಲ್ ನ್ನು ಎತ್ತಿಕೊಂಡು

ತನ್ನ ಸ್ಲೆಡ್ ಹತ್ತಿರ ನಡೆದ ಅದನ್ನು ಸ್ಲೆಡ್ ಮೇಲೆ ಇಟ್ಟು



ಮನೆಯ ಬಳಿಗೆ ತೆಗೆದುಕೊಂಡು ಹೋದ

ಇಗ್ಲೂಕ್ ನ ತಾಯಿ ಕೇಳಿದಳು

ಸೀಲ್ ಹಿಡಿದುಕೊಂಡು ಬಂದಿರಾ,

ಒಳ್ಳೆಯ ಬೇಟೆ

ಇಗ್ಲೂಕ್ ಆ ಸೀಲ್ ಮರಿಯನ್ನು ನೆಲದ ಮೇಲೆ ಇಟ್ಟ

ತಾಯಿ "ಅಯ್ಯೋ ಅದಿನ್ನು ಓಡಾಡುತ್ತಿದೆ"

ಎಂದು ಆಶ್ಚರ್ಯಪಟ್ಟಳು

ಅಪ್ಪ ಹೇಳಿದ ಅದರಲ್ಲೇನು ಆಶ್ಚರ್ಯ

ನಮ್ಮ ಮಗ ಅದನ್ನು ಸಾಯಿಸಲು

ಈಟಿಯನ್ನು ಎಸಿಯಲೇ ಇಲ್ಲ.



ತಾಯಿ ನಕ್ಕಳು.

ನೋಡಿ ಅದು ಹೇಗೆ ಎಲ್ಲವನ್ನು ಮೂಸುತ್ತಿದೆ

ಒಂದು ಮರಿ ನಾಯಿ ಹಾಗೆ



"ಅದು ನಾಯಿಮರಿ ಅಲ್ಲ ಅದೊಂದು ಮರಿ ಸೀಲ್

ಅದಿನ್ನೂ ಮೀನು ತಿನ್ನುವಷ್ಟು ದೊಡ್ಡದಲ್ಲ,

ಹಾಲು ಕೊಡಲು ನಮ್ಮಲ್ಲಿ ಇಲ್ಲ,

ಅದು ಉಪವಾಸ ಸಾಯುತ್ತದೆ."

ಅಪ್ಪ ಹೇಳಿದ

ಇಗ್ಲೂಕ್ ಕೇಳಿದ

ನಾಯಿ ಹಾಲು ಕುಡಿಸಬಹುದಲ್ಲ

ಅಪ್ಪ ಹೇಳಿದ

ನಾಯಿ ಈ ಮರಿ ಸೀಲ್ ನ್ನು ತಿಂದುಬಿಡುತ್ತದೆ.

ಇಗ್ಲೂಕ್ ನ ತಾಯಿ ಕೆಲವು ಮೀನು ತೆಗೆದು ಸೂಪ್ ಮಾಡಿದಳು

ಮರಿ ಸೀಲ್ ಅದನ್ನು ಮೂಸಿ ನೋಡಿ

ಎಲ್ಲವನ್ನು ನೆಕ್ಕಿ ಖಾಲಿ ಮಾಡಿತು.



ಅಪ್ಪ ಹೇಳಿದ

"ಓಹೋ ಇದಿನ್ನು ಹಸಿವೆಯಿಂದ ಸಾಯುವುದಿಲ್ಲ,

ಆದರೆ ಮಗು ಇದರ ಆಹಾರವನ್ನು ನೀನೆ ಕೊಡಬೇಕು

ನನಗೆ ನಮ್ಮೆಲ್ಲರಿಗೆ ಆಹಾರ ಹುಡುಕುವ ಕೆಲಸ ಇದೆ".



ಇಗ್ಲೂಕ್ ಸೀಲ್ ನ ತಲೆಯನ್ನು ಸವರುತ್ತಾ ಹೇಳಿದ

"ನಾನು ಇದಕ್ಕೆ ಬೇಕಾದ ಮೀನನ್ನು ಹಿಡಿಯುತ್ತೇನೆ".

"ಇದಕ್ಕೊಂದು ಹೆಸರು ಬೇಕಲ್ಲ,

ಇದನ್ನು ನಾನು ಸುಲಕ್ ಎಂದು ಕರೆಯುತ್ತೇನೆ."



ಮರುದಿನ ಬೆಳಗ್ಗೆ ಇಗ್ಲೂಕ್ ಅಪ್ಪನ ಜೊತೆಯಲ್ಲಿ ಮೀನು ಹಿಡಿಯಲು ಹೊರಟ

ಅಪ್ಪ ಹೇಳಿದ
ಈ ಮೀನು ಹಿಡಿಯುವ ಕೊಕ್ಕೆಯನ್ನು ಮತ್ತು ದಾರವನ್ನು ತೆಗೆದುಕೋ

ಒಂದು ಹಿಮದ ಮಧ್ಯದಲ್ಲಿರುವ ಗುಂಡಿಯಲ್ಲಿ ಕೊಕ್ಕೆ ಇಳಿಸಿ

ನಿನ್ನ ಸೀಲಿಗೆ ಮೀನು ಹಿಡಿ ಎಂದ.

ಇಗ್ಲೂಕ್ ಮೀನಿನ ಕೊಕ್ಕೆಗೆ ಒಂದು ಮಾಂಸವನ್ನು ಸಿಕ್ಕಿಸಿದ

ಅದನ್ನು ಗುಂಡಿ ಒಳಗೆ ಇಳಿಬಿಟ್ಟ.



ದಾರ ಎಳೆದಂತಾಯಿತು.

ತಕ್ಷಣ ಕೊಕ್ಕೆಯನ್ನು ಎಳೆದ.

ಅದರಲ್ಲಿ ಮೀನು ಇರಲಿಲ್ಲ

ಮತ್ತೊಮ್ಮೆ ಇಗ್ಲೂಕ್ ಕೊಕ್ಕೆಯನ್ನು ಇಳಿಬಿಟ್ಟ

ಸ್ವಲ್ಪ ಹೊತ್ತು ಕಾದ ನಂತರ ಮೇಲಕ್ಕೆ ಎಳೆದ

ಅದರೊಂದಿಗೆ ದೊಡ್ಡದೊಂದು ಮೀನು ಹೊರಬಂತು.





ಇಗ್ಲೂಕ್ ತನ್ನ ಸೀಲಿಗೆ ಆಹಾರ ದೊರಕಿಸಿದ

ಅಂದು ರಾತ್ರಿ ಸುಲಕ್ ಮತ್ತೊಮ್ಮೆ ಮೀನಿನ ಸೂಪ್ ತಿಂದ.

ಇಗ್ಲೂಕ್ ಹೇಳಿದ

"ನೋಡು ಅಪ್ಪ ಅದಕ್ಕೆ ಬೇಕಾದ ಮೀನು ನಾನು ಹಿಡಿದೆ"
ಅಪ್ಪ ನಕ್ಕು ಹೇಳಿದ ಇನ್ನು ಇದು ಹೆಚ್ಚು ಹೆಚ್ಚು ಮೀನು
ತಿನ್ನುತ್ತದೆ

ಹೌದು ಸುಲಕ್ ಮತ್ತೆ ಹೆಚ್ಚು ಸೂಪ್ ಕುಡಿದ.

ಸ್ವಲ್ಪ ದಿನದ ನಂತರ ಅದು ಮೀನು ತಿನ್ನಲು
ಆರಂಭಿಸಿತು .

ದಿನದಿಂದ ದಿನಕ್ಕೆ

ಅದು ತಿನ್ನುವ ಮೀನಿನ ಸಂಖ್ಯೆ ಹೆಚ್ಚಾಗುತ್ತಾ ಸಾಗಿತು.



ಈಗ ಇಗ್ಲೂಕ್ ಹೆಚ್ಚು ಹೆಚ್ಚು ಮೀನನ್ನು ಹಿಡಿಯಬೇಕಾಯಿತು.

ಅವನಿಗೆ ದಿನವಿಡಿ ಅದೇ ಕೆಲಸವಾಯಿತು.

ಜನರೆಲ್ಲ ಅದನ್ನು ನೋಡಿ ನಕ್ಕರು

ಒಬ್ಬ ಹಳಬ ಹೇಳಿದ.

"ಒಂದು ತಿಮಿಂಗಿಲವನ್ನು ಹಿಡಿ,

ಆಗ ನಿನ್ನ ಸೀಲಿಗೆ ಹಸಿವೆಯೇ ಆಗುವುದಿಲ್ಲ".



ಮಕ್ಕಳೆಲ್ಲ ಇಗ್ಲೂಕನನ್ನು ಕಿಚಾಯಿಸಿದರು

ಒಬ್ಬ ಹುಡುಗ ಹೇಳಿದ

"ಇಗ್ಲೂಕ್ ದಿನವಿಡಿ ಮೀನು ಹಿಡಿಯುತ್ತಾನೆ ,

ಮುಂದೆ ರಾತ್ರಿಯೂ ಹಿಡಿಯಬೇಕಾಗುತ್ತದೆ".

ಇಗ್ಲೂಕನ ತಾಯಿ ಹೇಳಿದಳು

"ಮಗನೇ ಜನರೆಲ್ಲ ನಿನ್ನನ್ನು ನೋಡಿ ನಗುತ್ತಿದ್ದಾರೆ .

ಮಕ್ಕಳು ತಮಾಷೆ ಮಾಡುತ್ತಿದ್ದಾರೆ,

ನಿನಗೆ ಆಟವಾಡಲು ಸಮಯವಿಲ್ಲ"

ಅಪ್ಪ ಹೇಳಿದ

"ಹೀಗಾದರೆ ನಿನಗೆ ಬೇಟೆ ಕಲಿಯಲು ಆಗುವುದಿಲ್ಲ ,

ನಿನಗೆ ಕೇವಲ ಮೀನು ಹಿಡಿಯಲು ಮಾತ್ರ ತಿಳಿಯುತ್ತದೆ.



ಒಂದು ದಿನ ಇಗ್ಲೂಕ್ ಮೀನು ಹಿಡಿಯುವ ಸಮಯದಲ್ಲಿ

ಅವನ ತಾಯಿ ಮನೆಯಲ್ಲಿ ತಂದೆಯೊಂದಿಗೆ ಹೇಳಿದಳು

"ಮಗ ಆಟವಾಡಲು ಸಮಯ ಬೇಕು,

ಬೇಟೆಯೂ ಕಲಿಯಬೇಕು,

ಅದಕ್ಕಾಗಿ ಈ ಸೀಲನ್ನು ಹೊರಗೆ ಓಡಿಸೋಣ ".

ಆಗ ಮನೆಯ ಸುತ್ತ ಬೊಗಳುವ ಶಬ್ದ ಕೇಳಿಸಿತು.

"ಅಯ್ಯೋ ನಾಯಿಗಳು ಸುಲಕ್ ನನ್ನು ತಿನ್ನುವಂತೆ ಕಾಣುತ್ತದೆ,

ಹಾಗೆ ಆಗಬಾರದು."

ಹೊರಗೋಡಿ ನಾಯಿಗಳನ್ನು ಓಡಿಸಿದಳು.



ತಾಯಿ  ಸುಲಕ್ ನನ್ನು ಮನೆಯಿಂದ ಓಡಿಸಿದಳು.



ಅಂದು ಇಗ್ಲೂಕ ಬಂದು ನೋಡಿದಾಗ

ಸುಲಕ್ ನಾಯಿಯೊಂದಿಗೆ ಹೋರಾಡಿದ್ದು ತಿಳಿಯಿತು.

ಇಗ್ಲೂಕ್ ಕೇಳಿದ “ಏನಾಯಿತು”.

ತಾಯಿ ಕಥೆಯನ್ನು ಹೇಳಿದಳು

ಮರುದಿನ ಇಗ್ಲೂಕ್ ಹೇಳಿದ

“ ನಾನು ಸುಲಕ್ ನನ್ನು ಮೀನು ಹಿಡಿಯಲು ಕರೆದುಕೊಂಡು ಹೋಗುತ್ತೇನೆ”.

ಅಪ್ಪ ಹೇಳಿದ

“ಬೇಡ ಮಗನೇ ಅದು ತುಂಬಾ ದೊಡ್ಡದಾಗಿದೆ ,

ನಮ್ಮ ಸ್ಲೆಡ್ ಮೇಲೆ ಜಾಗವಿಲ್ಲ,

ನಾವು ಹಿಡಿಯುವ ಬೇಟೆಯನ್ನು ಇಡಲು ಸ್ಥಳ ಬೇಕಲ್ಲ”.

ಇಗ್ಲೂಕ್ ಅಪ್ಪ ನಲ್ಲಿ ಗೋಗರಿದ

“ನನಗೂ ಒಂದು ಸ್ಲೆಡ್ ಮಾಡಿ ಕೊಡು”.

ಅಪ್ಪ ಕೆಲವು ಮರದ ತುಂಡುಗಳು

ಮತ್ತು ಚರ್ಮದ ದಾರಗಳಿಂದ ಒಂದು ಸ್ಲೆಡ್ ಮಾಡಿದ.
ಅದರ ಜೊತೆಯಲ್ಲಿ ನಾಲ್ಕು ನಾಯಿಗಳನ್ನು ಕೊಟ್ಟ.

ಮರುದಿನ ಬೆಳಿಗ್ಗೆ ಇಗ್ಲೂಕ್ ತನ್ನ ಸ್ಲೆಡ್ ಮೇಲೆ ಸುಲಕ್ ನನ್ನು ಕೂರಿಸಿ ಹೊರಟ

ಸುಲಕ್ ತಪ್ಪಿಸಿಕೊಳ್ಳಬಾರದು

ಎಂದು ಅದರ ಕುತ್ತಿಗೆಗೆ ಒಂದು ಹಗ್ಗವನ್ನು ಬಿಗಿದ.





ಹಿಮದ ಬಳಿ ಬಂದಾಗ ಇಗ್ಲೂಕ್ ಮೀನು ಹಿಡಿಯಲು ಹೋದ.

ಸುಲಕ್ ಹಗ್ಗವನ್ನು ಎಳೆಯತೊಡಗಿದ.

ಅವನು ಹಿಮದ ಗುಂಡಿಯಲ್ಲಿ ಹಾರಲು ಹೋದ

ಇಗ್ಲೂಕ್ ಹೇಳಿದ.

“ಓಹೋ ನೀನು ಬೇರೆ ಸೀಲ್ ಗಳ ಜೊತೆಯಲ್ಲಿ ಜೊತೆಯಲ್ಲಿ ಹೋಗಬೇಕೇ,

ನಿನಗೆ ಖುಷಿಯಾಗುವುದಾದರೆ ಹಾಗೆಯೇ ಆಗಲಿ ನೀನಿನ್ನು ಹೋಗು ಎಂದು



ಸುಲಕ್ ನ ಕುತ್ತಿಗೆ ಹಗ್ಗವನ್ನು ಬಿಚ್ಚಿದ.

ಸುಲುಕ್ ತಕ್ಷಣ ಗುಂಡಿಗೆ ಹಾರಿದ.

ಇಗ್ಲೂಕ ಬೇಜಾರಿನಿಂದ ಸ್ಲೆಡ್ ಬಳಿಗೆ

ಹೋಗತೊಡಗಿದ.

ಹಿಂದಿನಿಂದ ಬೊಗಳುವ ಶಬ್ದ ಕೇಳಿಸಿತು



ಇಗ್ಲೂಕ್ ನೋಡಿದ

ಸುಲುಕ್ ಒಂದು ದೊಡ್ಡ ಮೀನನ್ನು ಹಿಡಿದು

ಗುಂಡಿಯಿಂದ ಹೊರಗೆ ಬಂದಿದ್ದ

ಇಗ್ಲೂಕ್ ಖುಷಿಯಿಂದ ಓಡಿ ಬಂದು

ಸುಲುಕನನ್ನು ಅಪ್ಪಿಕೊಂಡ.



“ಓಹೋ ನೀನು ಓಡಿ ಹೋಗಲು ಹಾರಿದ್ದಲ್ಲ

ಮೀನು ಹಿಡಿಯಲು ಹೋಗಿದ್ದೆ ಅಲ್ಲವೇ,”

ಸೀಲುಗಳಿಗೆ ಮೀನು ಹಿಡಿಯಲು ತುಂಬಾ ಖುಷಿ

ಸುಲುಕ್ ಮತ್ತೆ ಗುಂಡಿಯೊಳಗೆ ಹಾರಿದ.

ಒಂದಾದ ನಂತರ ಇನ್ನೊಂದು ಮೀನು ಹಿಡಿದ

ತಾನೂ ಸಾಕಷ್ಟು ಮೀನು ತಿಂದ.

ಕೆಲವನ್ನು ಇಗ್ಲೂಕ್ ಗೂ ಉಳಿಸಿದ.

ಸಂಜೆಯ ವೇಳೆಗೆ ಹೊರಡುವ ಸಮಯವಾಯಿತು

ಇಗ್ಲೂಕ್ ನ ಮುಂದೆ ಮೀನುಗಳ ರಾಶಿಯೇ ಇತ್ತು .

ಅದನ್ನೆಲ್ಲಾ ಸ್ಲೆಡ್ ಮೇಲೆ ಸೇರಿಕೊಂಡು ಮನೆಗೆ ಬಂದ.
ಆ ಮಿನಿನ ರಾಶಿಯ ಮೇಲೆ ಸುಲುಕ್ ಕುಳಿತಿದ್ದ



ಜನರೆಲ್ಲ ಇದನ್ನು ನೋಡಿ ಆಶ್ಚರ್ಯಗೊಂಡರು.

“ಇಗ್ಲೂಕ್ ನೀನೊಬ್ಬ ದೊಡ್ಡ ಮೀನುಗಾರ” ಎಂದು ಹೊಗಳಿದರು.

ಇಗ್ಲೂಕ್ ಹೇಳಿದ “ನಾನಲ್ಲ ಮೀನು ಹಿಡಿದಿದ್ದು ,

ನನ್ನ ಸುಲುಕ್ ಇದನ್ನೆಲ್ಲಾ ಹಿಡಿದಿದ್ದು”.
ಅವರಿಗೆಲ್ಲ ಇಗ್ಲೂಕ್ ಮೀನು ಹಂಚಿದ



ಮರುದಿನ ಬೆಳಿಗ್ಗೆಯೂ ತಿನ್ನಲು ಮೀನು ಉಳಿದಿತ್ತು.

ಅಪ್ಪನೂ ಬೇಟೆಗೆ ಹೋಗಬೇಕಿರಲಿಲ್ಲ.

ಇಗ್ಲೂಕ್ ಮೀನು ಹಿಡಿಯಲು ಹೋಗಬೇಕಿರಲಿಲ್ಲ.

ಹಾಗಾಗಿ ಆಟವಾಡಲು ಹೊರಟ.

ಆದರೆ ಅಲ್ಲಿ ಮಕ್ಕಳೇ ಇರಲಿಲ್ಲ.

ಇಗ್ಲೂಕ್ ಕೇಳಿದ. “ಅಪ್ಪ ಮಕ್ಕಳೆಲ್ಲ ಎಲ್ಲಿ ಹೋದರು”?





ಅಪ್ಪ ನಗುತ್ತಾ ಹೇಳಿದ.

“ಅವರೆಲ್ಲ ಹಿಮದ ಬಳಿ ಹೋಗಿದ್ದಾರೆ ,

ಅಲ್ಲಿ ಮರಿ ಸೀಲ್ ನ್ನು ಹಿಡಿದು

ನಿನ್ನ ತರಹ ಮೀನು ಹಿಡಿಯಲು ಕಲಿಸಲು

ಹೋಗಿದ್ದಾರೆ”

ಮುಕ್ತಾಯ

